


# ಕರ್ನಾಟಕ ವಿಧಾನ ಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 12-03-2021 ಪ್ರಶ್ನೆ ಸಂಖ್ಯೆ : 941 (946)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಎಸ್.ನಾಗರಾಜ್(ಸಂದೇಶ್ ನಾಗರಾಜ್)(ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 12-03-2021

ಉತ್ತರಿಸುವ ಸಚಿವರು : ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ವಿಷಯ : ಮೈಸೂರು ಚಾಮರಾಜನಗರ ಗ್ರಾಮೀಣಾ ಪ್ರದೇಶಕ್ಕೆ ಸಾರಿಗೆ ಸೌಲಭ್ಯ

(ಅ) ಕೊರೋನಾ ಖಾಯಿಲೆ ಹರಡುವಿಕೆಯ ಪೂರ್ವದಲ್ಲಿ ಮೈಸೂರು -ಚಾಮರಾಜನಗರ ಜಿಲ್ಲೆಯ ಬಸ್ ಡಿಪೋಗಳಿಂದ ಗ್ರಾಮೀಣ ಪ್ರದೇಶಗಳಿಗೆ ಸಂಚರಿಸುತ್ತಿದ್ದ ಗ್ರಾಮೀಣ ಸಾರಿಗೆ ಬಸ್‌ಗಳ ಸಂಖ್ಯೆ ಎಷ್ಟು ; ಸುತ್ತುವಳಿಗಳ ಸಂಖ್ಯೆ ಎಷ್ಟು ; ಕೊರೋನಾ ಅವಧಿಯಲ್ಲಿ ಕಳೆದ ಒಂದು ವರ್ಷದಿಂದ ಕಡಿಮೆ ಮಾಡಿದ್ದ ಗ್ರಾಮೀಣ ಪ್ರದೇಶದ ಸಾರಿಗೆ ಬಸ್‌ಗಳ ಸಂಖ್ಯೆ ಎಷ್ಟು ; (ವಿವರ ಒದಗಿಸುವುದು)

(ಆ) ಈಗ ಶಾಲಾ ಕಾಲೇಜುಗಳು, ವ್ಯಾಪಾರ ವಹಿವಾಟು ಆರಂಭವಾಗಿ ಗ್ರಾಮೀಣ ಪ್ರದೇಶದ ವಿದ್ಯಾರ್ಥಿಗಳು ಮತ್ತು ಜನಸಾಮಾನ್ಯರು ಹೆಚ್ಚಿನ ಸಂಖ್ಯೆಯಲ್ಲಿ ತಾಲ್ಲೂಕು ಮತ್ತು ಜಿಲ್ಲಾ ಕೇಂದ್ರಗಳಿಗೆ ಹೋಗಿ ಬರುತ್ತಿರುವುದರಿಂದ ಎಲ್ಲಾ ಡಿಪೋಗಳಿಂದ ಗ್ರಾಮೀಣ ಪ್ರದೇಶಗಳಿಗೆ ಓಡಾಡುತ್ತಿದ್ದು, ಬಸ್‌ಗಳನ್ನು ಸುತ್ತುವಳಿಯನ್ನು ಮೊದಲಿನಂತೆ ಓಡಿಸಲು ಕ್ರಮ ಜರುಗಿಸಲಾಗುವುದೇ ;

(ಇ) ಜಿಲ್ಲೆಯ ಹೆಗ್ಗಡದೇವನ ಕೋಟೆ, ಸರಗೂರು, ಹುಣಸೂರು, ಕೊಳ್ಳೇಗಾಲ, ಹನೂರು, ಕೆ.ಆರ್.ನಗರ ಮೊದಲಾದ ಕಡೆಗಳಲ್ಲಿ ಜನಸಾಮಾನ್ಯರು ವಿದ್ಯಾರ್ಥಿಗಳು ಗ್ರಾಮೀಣ ಪ್ರದೇಶಗಳಿಗೆ ಎಂದಿನಂತೆ ಗ್ರಾಮೀಣ ಪ್ರದೇಶಗಳಿಗೆ ಬಸ್‌ಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ಓಡಿಸುವಂತೆ ಒತ್ತಾಯ ಮಾಡುತ್ತಿದ್ದು, ಈ ಬಗ್ಗೆ ಗಮನಹರಿಸಿ ಕೂಡಲೇ ಸೂಕ್ತ ಕ್ರಮ ಜರುಗಿಸಲಾಗುವುದೇ ?